

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಸದಸ್ಯರ ಹೆಸರು | : | ಶ್ರೀಮತಿ ಎಸ್. ವೀಣಾ ಅಚ್ಚಯ್ಯ (ವಿಧಾನ ಸಭೆಯಿಂದ ಚುನಾಯಿತರಾದವರು) |
| ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 2023 |
| ಉತ್ತರಿಸಬೇಕಾದ ದಿನಾಂಕ | : | 27.03.2020. |
| ಉತ್ತರಿಸಬೇಕಾದ ಸಚಿವರು | : | ಮಾನ್ಯ ಪಶುಸಂಗೋಪನೆ, ಹಜ್ ಹಾಗೂ ವಕ್ಫ್ ಸಚಿವರು |

| ಕ್ರ.ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ. | ರಾಜ್ಯದಲ್ಲಿ ದೇಶಿ (ನಾಟಿ) ಹಸು ಸಾಕಣೆ ಮತ್ತು ಸಂರಕ್ಷಣೆ ಮಾಡಲು ರೈತರು ಹಾಗೂ ಸಂಘ ಸಂಸ್ಥೆಗಳಿಗೆ ಸರ್ಕಾರದಿಂದ ದೊರೆಯುತ್ತಿರುವ ವಿವಿಧ ರೀತಿಯ ಸೌಲಭ್ಯಗಳೇನು; ಹಾಗೂ ಈ ಸಂಬಂಧ ಚಾಲ್ತಿಯಲ್ಲಿರುವ ಯೋಜನೆಗಳಾವುವು; | ರಾಜ್ಯದ ನಾಟಿ ಹಸು ತಳಿಗಳಾದ ಹಳ್ಳಿಕಾರ್, ಅಮೃತ್ ಮಹಲ್, ದೇವಣಿ, ಖಿಲಾರಿ ಇವುಗಳ ತಳಿ ಸಂರಕ್ಷಣೆ ಹಾಗೂ ಅಭಿವೃದ್ಧಿಗಾಗಿ ಪಶುಪಾಲನೆ ಮತ್ತು ಪಶುವೈದ್ಯಕೀಯ ಸೇವಾ ಇಲಾಖೆಯಿಂದ ಸ್ಥಾಪಿಸಲಾಗಿರುವ ವೀರ್ಯ ಸಂಸ್ಕರಣಾ ಕೇಂದ್ರಗಳಲ್ಲಿ ಹಳ್ಳಿಕಾರ್, ಅಮೃತ್ ಮಹಲ್, ದೇವಣಿ, ಖಿಲಾರಿ ಹೋರಿಗಳಿಂದ ವೀರ್ಯವನ್ನು ಸಂಸ್ಕರಿಸಿ ಘನೀಕೃತ ವೀರ್ಯ ನಳಿಕೆಗಳನ್ನು ಪಶುವೈದ್ಯಕೀಯ ಸಂಸ್ಥೆಗಳ ಮುಖಾಂತರ ರೂ.15-00 ದರದಲ್ಲಿ ಕೃತಕ ಗರ್ಭದಾರಣೆಗಾಗಿ ನೀಡಲಾಗುತ್ತಿದೆ.<br>ಪಶುಪಾಲನೆ ಮತ್ತು ಪಶುವೈದ್ಯಕೀಯ ಸೇವಾ ಇಲಾಖೆಯ ನಾಟಿ ಹಸು ತಳಿ ಸಂರಕ್ಷಣೆ ಹಾಗೂ ಸಂವರ್ಧನೆಗಾಗಿ ಇರುವ ಕ್ಷೇತ್ರಗಳಲ್ಲಿ ಜನಿಸುವ ಹಳ್ಳಿಕಾರ್, ಅಮೃತ್ ಮಹಲ್, ದೇವಣಿ, ಖಿಲಾರಿ, ಮಲೆನಾಡುಗಿಡ್ಡ ಹೋರಿ ಕರುಗಳನ್ನು ತಳಿ ಸಂವರ್ಧನೆಗಾಗಿ ರೈತರಿಗೆ ಬಹಿರಂಗ ಹರಾಜು ಮೂಲಕ ನೀಡಲಾಗುತ್ತಿದೆ. |
| ಆ | ಸದರಿ ಯೋಜನೆಗಳಿಂದ ರೈತರಿಗೆ ದೊರೆಯುತ್ತಿರುವ ಆರ್ಥಿಕ ನೆರವುಗಳೇನು; | ರೈತರಿಗೆ ದೇಶಿ ಹಸು ಸಾಕಾಣಿಕೆಗಾಗಿ ಯಾವುದೇ ಆರ್ಥಿಕ ನೆರವು ನೀಡಲಾಗುತ್ತಿಲ್ಲ. |
| ಇ | 2019-20ನೇ ಸಾಲಿನಲ್ಲಿ ಕೊಡಗು ಹಾಗೂ ರಾಮನಗರ ಜಿಲ್ಲೆಗಳಲ್ಲಿ ಸದರಿ ಯೋಜನೆಗಳಿಂದ ಪ್ರಯೋಜನ ಪಡೆದ ಫಲಾನುಭವಿಗಳ ಪಟ್ಟಿ ಹಾಗೂ ಸಂಪೂರ್ಣ ವಿವರಗಳನ್ನು ನೀಡುವುದು? | ಅನ್ವಯಿಸುವುದಿಲ್ಲ. |

ಪಸಂಮೀ 149 ಸಲೆವಿ 2020

ಪ್ರಭು ಬಿ. ಚವ್ಹಾಣ್

ಪಶುಸಂಗೋಪನೆ, ಹಜ್ ಮತ್ತು ವಕ್ಫ್ ಸಚಿವರು,